ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ಸೆರೋ ಸಮೀಕ್ಷೆ (Sero Survey) ಮತ್ತು ಕೋವಿಡ್-19ರ ನೈಜ ಪ್ರಕರಣಗಳು

ಶ್ರೀ ಕೆ. ಎ. ತಿಪ್ಪೇಸ್ವಾಮಿ(ನಾಮನಿರ್ದೇಶನ ಹೊಂದಿದವರು) -

79 (74) ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ರಾಜ್ಯದಲ್ಲಿ ಇಲ್ಲಿಯವರೆಗೆ ಎಷ್ಟು ಬಾರಿ ಸೆರೋ ಸಮೀಕ್ಷೆ (Sero Survey) ಯನ್ನು ನಡೆಸಲಾಗಿದೆ; (ನಗರವಾರು ಮತ್ತು ಜಿಲ್ಲಾವಾರು ಸಂಪೂರ್ಣ ಮಾಹಿತಿಯನ್ನು ನೀಡುವುದು)

(ಆ) ಈ ಸೆರೋ ಸಮೀಕ್ಷೆಯಲ್ಲಿ ಕೋವಿಡ್-19ರ ನೈಜ ಪ್ರಕರಣಗಳು ಮತ್ತು ಜನಸಂಖ್ಯೆಯಲ್ಲಿ ಕಂಡು ಬಂದಿರುವ ಸೋಂಕುಗಳ ನಡುವೆ ವ್ಯತ್ಯಾಸವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಪ್ರಕರಣಗಳ ನಡುವಿನ ಶೇಕಡಾವಾರು ವ್ಯತ್ಯಾಸವೆಷ್ಟು;

(ಇ) ರಾಜ್ಯ ಸರ್ಕಾರ ನಗರ ಪ್ರದೇಶಗಳಲ್ಲಿ ಮತ್ತು ವಿವಿಧ ಜಿಲ್ಲೆಗಳಲ್ಲಿ ನಡೆಸುತ್ತಿರುವ ವಿವಿಧ ರೀತಿಯ ಕೊರೋನಾ ಪರೀಕ್ಷೆಗಳು ಯಾವುವು; ಇದುವರೆಗೂ ಎಷ್ಟು ಪರೀಕ್ಷೆಗಳನ್ನು ಮಾಡಲಾಗಿದೆ; ಈ ಕುರಿತು ಸರ್ಕಾರ ವ್ಯಯಿಸಿರುವ ವೆಚ್ಚವೆಷ್ಟು; (ಜಿಲ್ಲಾವಾರು ಸಂಪೂರ್ಣ ಮಾಹಿತಿ ನೀಡುವುದು)

(ಈ) ಸರ್ಕಾರವು ಅನುಸರಿಸುತ್ತಿರುವ ಪರೀಕ್ಷೆ ಕಾರ್ಯವಿಧಾನವು ದೋಷಪೂರಿತವಾಗಿದ್ದು, ಅಂತಹ ಅನೇಕ ಸಾಂಕ್ರಾಮಿಕ ಪ್ರಕರಣಗಳು ವರದಿಯಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)

(ಉ) ಸರ್ಕಾರವು ಸಾರ್ವಜನಿಕರನ್ನು ಅವರ ಇಚ್ಛೆ ಮೇರೆಗೆ ಪರೀಕ್ಷಿಸುವ ಪ್ರಕ್ರಿಯೆಯನ್ನು ಕೈಗೊಂಡಿದೆಯೇ? (ಮಾಹಿತಿ ಒದಗಿಸುವುದು)